

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| **ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** | **677** |
| ಸದಸ್ಯರ ಹೆಸರು | ಶ್ರೀ ಎಸ್. ರುದ್ರೇಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 15.02.2022 |
| ಉತ್ತರಿಸುವ ಸಚಿವರು | ಗಣಿ ಮತ್ತು ಭೂವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ, ಹಿರಿಯ ನಾಗರಿಕರ ಸಬಲೀಕರಣ ಸಚಿವರು. |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಲ್ಲು ಗಣಿಗಳಲ್ಲಿ ಗಣಿಗಾರಿಕೆ ಯಿಂದಾಗಿ, ಬಹಳಷ್ಟು ಅಗಲ ಹಾಗೂ ಆಳವಾದ ಗುಂಡಿಗಳಾಗಿದ್ದು, ಇವುಗಳಲ್ಲಿ ಜನ ಹಾಗೂ ಜಾನುವಾರುಗಳು ಆಕಸ್ಮಿಕವಾಗಿ ಬಿದ್ದು ತೊಂದರೆ ಅನುಭವಿಸು ತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ನಿಟ್ಟಿನಲ್ಲಿ ಸರ್ಕಾರ ಯಾವ ಸೂಕ್ತ ಕ್ರಮಗಳನ್ನು ಕೈಗೊಂಡಿದೆ; (ಜಿಲ್ಲಾವಾರು ವಿವರ ನೀಡುವುದು) | ಬಂದಿರುತ್ತದೆ.<br>ರಾಜ್ಯದಲ್ಲಿನ ಖನಿಜ ನಿಕ್ಷೇಪ ಇರುವ ಪ್ರದೇಶಗಳಲ್ಲಿ, ಸದರಿ ನಿಕ್ಷೇಪಗಳನ್ನು ತೆಗೆಯಲು ಗಣಿಗಾರಿಕೆ ನಡೆಸಿ, ಗಣಿ ಚಟುವಟಿಕೆಗಳು ಸ್ಥಗಿತಗೊಂಡ ನಂತರ ಗುಂಡಿಗಳಾಗಿ ನೀರು ತುಂಬಿಕೊಂಡು ಜನ-ಜಾನುವಾರು ಮತ್ತು ಮಕ್ಕಳ ಜೀವ ಹಾನಿಯಾಗುತ್ತಿರುವ ಹಿನ್ನೆಲೆಯಲ್ಲಿ, ಮಾನ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ 35543/2014ರ ಆದೇಶ ದಿನಾಂಕ 15.06.2015 ರಲ್ಲಿ, ಕ್ವಾರಿ ಗುಂಡಿಗಳ (Abandoned Quarry pits) ಸುತ್ತಲೂ ಸುರಕ್ಷತಾ ಕ್ರಮಗಳನ್ನು ಕೈಗೊಳ್ಳಲು ನಿರ್ದೇಶನ ನೀಡಿರುತ್ತದೆ.<br>ರಾಜ್ಯದಲ್ಲಿ, ಬಹಳಷ್ಟು ವರ್ಷಗಳ ಹಿಂದೆ ಗಣಿಗಾರಿಕೆ ನಡೆಸಿ, ಉಂಟಾಗಿರುವ ಪರಿತ್ಯಕ್ತ ಕ್ವಾರಿ (Abandoned Quarry) ಗುಂಡಿಗಳ ಸುತ್ತಲೂ ಸ್ಟೋನ್ ತಡೆಗೋಡೆ ನಿರ್ಮಿಸಲು ಸರ್ಕಾರದಿಂದ ಆಯವ್ಯಯದಲ್ಲಿ ಅನುದಾನ ಮೀಸಲಿರಿಸಲಾಗುತ್ತಿದೆ.<br>2015-16ನೇ ಸಾಲಿನಿಂದ 2021-22ನೇ ಸಾಲಿನವರೆಗೆ ಪರಿತ್ಯಕ್ತ ಕ್ವಾರಿ (Abandoned Quarry) ಗುಂಡಿಗಳ ಸುತ್ತಲೂ ಸ್ಟೋನ್ ತಡೆಗೋಡೆ ನಿರ್ಮಿಸಿ, ಸುರಕ್ಷತೆ ಕ್ರಮ ಕೈಗೊಳ್ಳಲು ಸರ್ಕಾರದಿಂದ ರೂ.3458.85 ಲಕ್ಷಗಳ ಅನುದಾನ ಬಿಡುಗಡೆಗೊಂಡಿದ್ದು, ಸದರಿ ಅನುದಾನವನ್ನು ಬಳಸಿಕೊಂಡು ವಿವಿಧ ಜಿಲ್ಲೆಗಳಲ್ಲಿ 97 ಪರಿತ್ಯಕ್ತ ಕ್ವಾರಿ ಗುಂಡಿಗಳ ಸುತ್ತಲೂ ಸುರಕ್ಷತೆಗಾಗಿ ತಡೆಗೋಡೆ ನಿರ್ಮಿಸಲು ಕ್ರಮ ವಹಿಸಲಾಗಿರುತ್ತದೆ.<br>**ವಿವರಗಳನ್ನು ಅನುಬಂಧ-01ರಲ್ಲಿ ನೀಡಲಾಗಿದೆ.**<br>ಮುಂದುವರೆದು,<br>➢ ಚಾಲ್ತಿ ಕಲ್ಲುಗಣಿ ಗುತ್ತಿಗೆಗಳ ಸಂಬಂಧ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994ರ ಕಲ್ಲುಗಣಿ ಗುತ್ತಿಗೆ ಕರಾರು (ನಮೂನೆ-E) ರ ಭಾಗ-VII ರಲ್ಲಿನ ಷರತ್ತು ನಿಬಂಧನೆಗಳಂತೆ ಕಲ್ಲುಗಣಿ ಗುತ್ತಿಗೆದಾರರು ಸುರಕ್ಷತೆಗಾಗಿ ಕಲ್ಲುಗಣಿ ಗುತ್ತಿಗೆ ಪ್ರದೇಶಗಳಲ್ಲಿ ಗಡಿ ಸ್ತಂಭ, ನಾಮಫಲಕ ಹಾಗೂ ಗುತ್ತಿಗೆ ಪ್ರದೇಶದ ಸುತ್ತಲೂ ತಂತಿ ಬೇಲಿ ಸ್ಥಾಪಿಸಿ- |

. . . 2

| | | |
|---|---|---|
| | | ನಿರ್ವಹಿಸುವುದನ್ನು ಕಡ್ಡಾಯ ಗೊಳಿಸಲಾಗಿದೆ.<br>➢ ಕಲ್ಲುಗಣಿ ಗುತ್ತಿಗೆ ಪ್ರದೇಶಗಳಲ್ಲಿ ಗಣಿಗಾರಿಕೆ ನಿರ್ವಹಿಸಲು ಅನುಮೋದಿತ ಕ್ವಾರಿಯಿಂಗ್ ಪ್ಲಾನ್ ಮತ್ತು ಪರಿಸರ ಅನುಮತಿ ಪತ್ರ ಕಡ್ಡಾಯಗೊಳಿಸಲಾಗಿರುತ್ತದೆ.<br>➢ ಕಲ್ಲುಗಣಿ ಗುತ್ತಿಗೆದಾರರು ಅನುಮೋದಿತ ಕ್ವಾರಿಯಿಂಗ್ ಪ್ಲಾನ್, ಪರಿಸರ ಅನುಮತಿ ಪತ್ರದಲ್ಲಿನ ಷರತ್ತು ಮತ್ತು ನಿಬಂಧನೆಗಳನ್ನು ಹಾಗೂ ಗಣಿ ಸುರಕ್ಷಿತ ನಿಯಮಗಳನ್ನು ಪಾಲಿಸಿ ಗಣಿಗಾರಿಕೆಯನ್ನು ನಿರ್ವಹಿಸಲು ಹಾಗೂ ಈ ಸಂಬಂಧ Director General Mines Safety (DGMS) ರವರಿಂದ ದೃಢೀಕೃತ ಪ್ರಮಾಣ ಪತ್ರ ಪಡೆದು ಸಲ್ಲಿಸುವುದನ್ನು ಕಡ್ಡಾಯಗೊಳಿಸಿದೆ.<br>➢ Mine Closure Plan ನಂತೆ ಗಣಿ ಗುತ್ತಿಗೆದಾರರುಗಳು ಗುತ್ತಿಗೆ ಪ್ರದೇಶದಲ್ಲಿ ಉಂಟಾಗಿರುವ ಗುಂಡಿಗಳನ್ನು ಮುಚ್ಚಿ ಸದರಿ ಪ್ರದೇಶವನ್ನು ಪುನರ್ ಸ್ಥಾಪಿಸಬೇಕಾಗಿರುತ್ತದೆ.<br>ಆದ್ದರಿಂದ, ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಗಳು, 1994 ನಿಯಮ 36(5) ರಂತೆ ಗುತ್ತಿಗೆದಾರರಿಂದ ವಾರ್ಷಿಕ ಉಪಖನಿಜ ಪ್ರಮಾಣಕ್ಕೆ ತಗಲುವ ರಾಜಧನದ ಶೇಕಡ 10 ರಷ್ಟು ಮೊತ್ತದ ಭದ್ರತಾ ಠೇವಣಿಯನ್ನು ಬ್ಯಾಂಕ್ ಗ್ಯಾರಂಟಿ ರೂಪದಲ್ಲಿ ಪಡೆಯಲಾಗುತ್ತದೆ. ಒಂದು ವೇಳೆ, ಗುತ್ತಿಗೆದಾರನು ಗುತ್ತಿಗೆ ಅವಧಿ ಮುಕ್ತಾಯವಾದ ನಂತರ Mine Closure Plan ನಂತೆ ಗುತ್ತಿಗೆ ಪ್ರದೇಶದಲ್ಲಿ ಉಂಟಾಗಿರುವ ಗುಂಡಿಗಳನ್ನು ಮುಚ್ಚಿ ಸದರಿ ಪ್ರದೇಶವನ್ನು ಪುನರ್ ಸ್ಥಾಪಿಸಲು ಕ್ರಮ ವಹಿಸದಿದ್ದಲ್ಲಿ ಬ್ಯಾಂಕ್ ಗ್ಯಾರಂಟಿ ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು ಇಲಾಖೆಯಿಂದ ಸದರಿ ಪ್ರದೇಶವನ್ನು ಪುನರ್ ಸ್ಥಾಪಿಸಲು ಕ್ರಮ ವಹಿಸಲಾಗುತ್ತದೆ. |
| ಆ) | ಕೆಲವು ಜಿಲ್ಲೆಗಳಲ್ಲಿ ಈ ರೀತಿಯ ಗುಂಡಿಗಳನ್ನು ಮುಚ್ಚಲು ಪರಿಸರ ಇಲಾಖೆಯ ನಿಯಮದಂತೆ ಕೈಗಾರಿಕೆಗಳ ತ್ಯಾಜ್ಯಗಳು, ವಿಶೇಷವಾಗಿ ಕಬ್ಬಿಣ ಹಾಗೂ ಉಕ್ಕಿನ ಎರಕ ಗಳಲ್ಲಿ ಉಂಟಾಗುವ ಮರಳು ಸಂಬಂಧಿ ತ್ಯಾಜ್ಯಗಳನ್ನು ತುಂಬಲು ಬೇಡಿಕೆ ಬಂದಿದ್ದು, ಅವುಗಳ ಬಗ್ಗೆ ಸರ್ಕಾರ ಏನು ಕ್ರಮ ಕೈಗೊಂಡಿದೆ? (ವಿವರ ಒದಗಿಸುವುದು) | ಕಲ್ಲುಗಣಿ ಗುತ್ತಿಗೆ ಪ್ರದೇಶಗಳ ಗುಂಡಿಗಳಲ್ಲಿ ಕೈಗಾರಿಕೆಗಳ ತ್ಯಾಜ್ಯಗಳು, ವಿಶೇಷವಾಗಿ ಕಬ್ಬಿಣ ಹಾಗೂ ಉಕ್ಕಿನ ಎರಕಗಳಲ್ಲಿ ಉಂಟಾಗುವ ಮರಳು ಸಂಬಂಧಿ ತ್ಯಾಜ್ಯಗಳನ್ನು ತುಂಬಲು ಗಣಿ ಮತ್ತು ಭೂವಿಜ್ಞಾನ ಇಲಾಖೆಗೆ ಯಾವುದೇ ಪ್ರಸ್ತಾವನೆ ಸ್ವೀಕೃತವಾಗಿರುವುದಿಲ್ಲ. |

ಸಂಖ್ಯೆ ಸಿಐ -ಎಂಎಂಎನ್/49/2022

Halappa BA

**(ಆಚಾರ್ ಹಾಲಪ್ಪ ಬಸಪ್ಪ)**
ಗಣಿ ಮತ್ತು ಭೂವಿಜ್ಞಾನ ಹಾಗೂ
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು
ವಿಕಲಚೇತನರ, ಹಿರಿಯ ನಾಗರಿಕರ
ಸಬಲೀಕರಣ ಸಚಿವರು.

# ಅನುಬಂಧ

ಕಲ್ಲುಗಣಿಗಾರಿಕೆಯಿಂದ ಉಂಟಾಗಿರುವ ಪರಿತ್ಯಕ್ತ ಕ್ವಾರಿ (Abandoned Quarry) ಗುಂಡಿಗಳ ಸುತ್ತಲೂ ಸ್ಟೋನ್ ತಡೆಗೋಡೆ ನಿರ್ಮಿಸಿರುವ ಜಿಲ್ಲಾವಾರು ಹಾಗೂ ವರ್ಷವಾರು ವಿವರ ಕೆಳಕಂಡಂತಿದೆ:

## 2015-16ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಉಡುಪಿ | **994.00** | 06 |
| 2 | ರಾಯಚೂರು | | 04 |
| 3 | ಯಾದಗಿರಿ | | 04 |
| 4 | ಗದಗ | | 05 |
| 5 | ಕಾರವಾರ | | 02 |
| 6 | ಬೆಳಗಾವಿ | | 03 |
| ಒಟ್ಟು | | | **24** |

## 2016-17ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಬಳ್ಳಾರಿ | **1498.75** | 5 |
| 2 | ಧಾರವಾಡ | | 5 |
| 3 | ಬೆಂಗಳೂರು ನಗರ | | 29 |
| ಒಟ್ಟು | | | **39** |

## 2017-18ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಬೆಂಗಳೂರು ಗ್ರಾಮಾಂತರ | **196.96** | 06 |
| 2 | ಧಾರವಾಡ | | 01 |
| ಒಟ್ಟು | | | **07** |

2018-19ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಬೆಂಗಳೂರು ಗ್ರಾಮಾಂತರ | 219.92 | 06 |
| 2 | ಕೊಡಗು | | 02 |
| 3 | ರಾಮನಗರ | | 02 |
| 4 | ಉತ್ತರಕನ್ನಡ | | 01 |
| ಒಟ್ಟು | | | 11 |

2019-20ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ.

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಬೆಂಗಳೂರು ನಗರ | 199.22 | 04 |
| 2 | ಬೆಂಗಳೂರು ಗ್ರಾಮಾಂತರ | | 04 |
| 3 | ರಾಮನಗರ | | 01 |
| ಒಟ್ಟು | | | 09 |

2020-21ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಕೊಡಗು | 300.00 | 02 |
| ಒಟ್ಟು | | | 02 |

2021-22ನೇ ಸಾಲಿನಲ್ಲಿ ವೆಚ್ಚ ಮಾಡಿರುವ ಮೊತ್ತದ ವಿವರ.

| ಕ್ರ.ಸಂ. | ಜಿಲ್ಲೆ | ವೆಚ್ಚಮಾಡಿರುವ ಮೊತ್ತ (ರೂ.ಲಕ್ಷ) | ತಡೆಗೋಡೆ ಕಾಮಗಾರಿ ನಿರ್ವಹಿಸಿರುವ ಕ್ವಾರಿ ಗುಂಡಿಗಳ ಸಂಖ್ಯೆ |
|---|---|---|---|
| 1 | ಬೆಂಗಳೂರು(ಗ್ರಾ) | 50.00 | 05 |
| ಒಟ್ಟು | | | 05 |

CI-MMN-49-2022

Deputy Director (Min. Admn)
Dept. of Mines & Geology
Bangalore-560001